ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 178
ಸದಸ್ಯರ ಹೆಸರು: ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
ಉತ್ತರಿಸುವ ದಿನಾಂಕ: 03-03-2020
ಉತ್ತರಿಸುವವರು: ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

| | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿ ರೇಷ್ಮೆ ಬೆಳೆಗಾರರು ಅನೇಕ ಸಂಕಷ್ಟಗಳನ್ನು ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br>ರೇಷ್ಮೆ ಬೆಳೆಗಾರರಿಗೆ ಸೂಕ್ತ ತಾಂತ್ರಿಕ ಮಾರ್ಗದರ್ಶನ ಒದಗಿಸಿ ರೇಷ್ಮೆ ಕೃಷಿ ಅಭಿವೃದ್ಧಿಗಾಗಿ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ಯೋಜನೆ ಹಾಗೂ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಮುಖಾಂತರ ರೇಷ್ಮೆ ಬೆಳೆಗಾರರ ಸಂಕಷ್ಟಗಳನ್ನು ಪರಿಹರಿಸಲು ಕ್ರಮ ವಹಿಸಲಾಗುತ್ತಿದೆ. |
| ಆ | ಕಳೆದ ಒಂದು ವರ್ಷದಿಂದ ರೇಷ್ಮೆ ಗೂಡಿನ ಬೆಲೆಯು ತೀವ್ರ ಕುಸಿತ ಕಂಡಿದ್ದು, ಬೆಳೆಗಾರರು ಸಂಕಷ್ಟದಲ್ಲಿದ್ದು, ಇವರುಗಳಿಗೆ ಸರ್ಕಾರ ಯಾವ ಪರಿಹಾರವನ್ನು ಕಲ್ಪಿಸಿದೆ; | ಪ್ರಸಕ್ತ ಸಾಲಿನಲ್ಲಿ ರೇಷ್ಮೆ ಗೂಡಿನ ಧಾರಣೆಯಲ್ಲಿ ಕುಸಿತ ಕಂಡು ಬಂದಿರುವುದಿಲ್ಲ. ಧಾರಣೆಗಳು ಉತ್ತಮವಾಗಿರುತ್ತದೆ.<br>ರೇಷ್ಮೆ ಗೂಡಿನ ಧಾರಣೆ ಕುಸಿತಗೊಂಡಾಗ ಶ್ರೇಣೀಕರಣ / ವರ್ಗೀಕರಣ ಆಧಾರದ ಮೇಲೆ ರಕ್ಷಣಾತ್ಮಕ ದರ ನೀಡುವ ಕಾರ್ಯಕ್ರಮವಿದೆ.<br>ಪ್ರಸ್ತುತ ದ್ವಿತಳಿ ರೇಷ್ಮೆ ಗೂಡಿನ ದರ ಪ್ರತಿ ಕೆ.ಜಿ.ಗೆ ರೂ.260/- ಹಾಗೂ ಮಿಶ್ರತಳಿ ಗೂಡಿನ ದರ ಪ್ರತಿ ಕೆ.ಜಿ.ಗೆ ರೂ.220/-ಕ್ಕಿಂತ ಕಡಿಮೆಯಾದಾಗ ರಕ್ಷಣಾತ್ಮಕ ದರ ನೀಡಲು ಕ್ರಮವಹಿಸಲಾಗುತ್ತದೆ. |
| ಇ | ರೇಷ್ಮೆ ಗೂಡಿಗೆ ಸರ್ಕಾರವು ಪ್ರೋತ್ಸಾಹಧನವನ್ನು ನೀಡುತ್ತಿದ್ದು, ಅದನ್ನು ಈಗ ರೈತರಿಗೆ ನೀಡುವ ಕುರಿತು ಕ್ರಮ ಕೈಗೊಳ್ಳುವುದೇ; | ರೇಷ್ಮೆ ಗೂಡಿನ ಧಾರಣೆಯು ಕುಸಿತಗೊಂಡಾಗ ಪ್ರೋತ್ಸಾಹಧನವನ್ನು ರಕ್ಷಣಾತ್ಮಕ ದರವಾಗಿ ನೀಡುವ ಕಾರ್ಯಕ್ರಮ ಜಾರಿಯಲ್ಲಿದೆ. ಪ್ರಸ್ತುತ ರೇಷ್ಮೆ ಗೂಡಿನ ಧಾರಣೆಗಳು ಉತ್ತಮ ವಾಗಿರುವುದರಿಂದ ಪ್ರೋತ್ಸಾಹಧನ ನೀಡುವ ಕ್ರಮ ಉದ್ಭವಿಸುವುದಿಲ್ಲ. |
| ಈ | ಸದರಿ ಇಲಾಖೆಯಲ್ಲಿ ಮಂಜೂರಾದ ಅಧಿಕಾರಿ ಮತ್ತು ಸಿಬ್ಬಂದಿಗಳ ಸಂಖ್ಯೆಯಲ್ಲಿ ಅರ್ಧದಷ್ಟು ಹುದ್ದೆಗಳು ಖಾಲಿ ಇದ್ದು, ರೈತರಿಗೆ ತಾಂತ್ರಿಕತೆ ಹಾಗೂ ಸಹಾಯ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ರೇಷ್ಮೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿಮಾಡಲು ಕ್ರಮವಹಿಸಲಾಗುತ್ತಿದೆ. ಪ್ರಸ್ತುತ ಲಭ್ಯವಿರುವ ಅಧಿಕಾರಿ / ಸಿಬ್ಬಂದಿಗಳಿಂದ ರೇಷ್ಮೆ ಬೆಳೆಗಾರರಿಗೆ ಸೂಕ್ತ ತಾಂತ್ರಿಕ ಮಾರ್ಗದರ್ಶನ ಹಾಗೂ ಚಾಲ್ತಿಯಲ್ಲಿರುವ ಯೋಜನೆಗಳನ್ನು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಉ | ಸದರಿ ಹುದ್ದೆಗಳನ್ನು ಯಾವ ಕಾಲಮಿತಿ ಯೊಳಗೆ ಭರ್ತಿ ಮಾಡಲಾಗುವುದು? | ರೇಷ್ಮೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆ ಪ್ರಗತಿಯಲ್ಲಿದ್ದು ಈ ಪ್ರಕ್ರಿಯೆ ಪೂರ್ಣಗೊಂಡ ನಂತರ ಆರ್ಥಿಕ ಇಲಾಖೆಯ ಅನುಮೋದನೆ ಪಡೆದು ಖಾಲಿ ಹುದ್ದೆಗಳನ್ನು ಭರ್ತಿಮಾಡಲು ಕ್ರಮವಹಿಸಲಾಗುವುದು. |

ರೇಷ್ಮೆ 25 ರೇಕೃವಿ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ ತೋಟಗಾರಿಕೆ
ಮತ್ತು ರೇಷ್ಮೆ ಸಚಿವರು